ಕರ್ನಾಟಕ ಸರ್ಕಾರ

ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1145

ಸದಸ್ಯರ ಹೆಸರು : ಶ್ರೀ ಎಸ್.ಎಲ್.ಭೋಜೇಗೌಡ

ಉತ್ತರಿಸಬೇಕಾದ ದಿನಾಂಕ : 17-03-2020

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ | ರಾಜ್ಯದಲ್ಲಿರುವ ಸಾರ್ವಜನಿಕ ಉದ್ದಿಮೆಗಳು ಎಷ್ಟು; | ಕರ್ನಾಟಕ ರಾಜ್ಯದಲ್ಲಿ ಸಾರ್ವಜನಿಕ ಉದ್ದಿಮೆಗಳ ವ್ಯಾಪ್ತಿಯಲ್ಲಿ ಒಟ್ಟು 60 ಸಾರ್ವಜನಿಕ ಉದ್ದಿಮೆಗಳಿವೆ. |
| ಆ | ಕಳೆದ 3 ವರ್ಷಗಳಿಂದ ಗಳಿಸಿದ ಲಾಭ ಹಾಗೂ ಹಾನಿ ಎಷ್ಟು; | ಕಳೆದ 3 ವರ್ಷಗಳಿಂದ(2016-17 ರಿಂದ 2018-19) ಗಳಿಸಿದ ಲಾಭ ರೂ.5359.12 ಕೋಟಿಗಳು ಹಾಗೂ ನಷ್ಟ ರೂ.4697.41 ಕೋಟಿಗಳು. |
| ಇ | ಇಲ್ಲಿಯವರೆಗೆ ಸತತವಾಗಿ ಹಾನಿ ಅನುಭವಿಸುತ್ತಿರುವ ಉದ್ದಿಮೆಗಳು ಯಾವುವು; | ಕರ್ನಾಟಕ ನೀರಾವರಿ ನಿಗಮ ನಿ., ಕೃಷ್ಣಾ ಭಾಗ್ಯ ಜಲ ನಿಗಮ ನಿ., ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿ., ಮೈಸೂರು ಕಾಗದ ಕಾರ್ಖಾನೆ ನಿ., ಮೈಸೂರು ಸಕ್ಕರೆ ಕಂಪನಿ ನಿ., ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿ., ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮ ನಿ., ಎನ್ ಜಿ ಇ ಎಫ್ (ಹುಬ್ಬಳ್ಳಿ) ನಿ. ಮತ್ತು ಕರ್ನಾಟಕ ರಾಜ್ಯ ತೆಂಗಿನ ನಾರಿನ ಅಭಿವೃದ್ಧಿ ನಿಗಮ ನಿ. |
| ಈ | ಇವುಗಳ ಪುನಶ್ಚೇತನಕ್ಕೆ ಸರ್ಕಾರದಿಂದ ಕೈಗೊಂಡ ಕ್ರಮ ಏನು? | ಸತತವಾಗಿ ಹಾನಿ ಅನುಭವಿಸುತ್ತಿರುವ 14 ಉದ್ದಿಮೆಗಳ ಪೈಕಿ, 11 ಉದ್ದಿಮೆಗಳು ಸಾರ್ವಜನಿಕ ಸಾರಿಗೆ, ವಿದ್ಯುತ್ ಪ್ರಸರಣ, ನೀರಾವರಿ, ಮೂಲಭೂತ ಸೌಲಭ್ಯ ಅಭಿವೃದ್ಧಿ ಮತ್ತು ಸಾಮಾಜಿಕ ಅಭಿವೃದ್ಧಿ(ವಾಣಿಜ್ಯ) ಕ್ಷೇತ್ರದ ಉದ್ದಿಮೆಗಳಾಗಿದ್ದು, ಈ ಎಲ್ಲಾ ಉದ್ದಿಮೆಗಳು ಸಮಾಜದ ಎಲ್ಲಾ ಸ್ತರದ ನಾಗರಿಕರಿಗೆ ಮೂಲಭೂತ ಸೌಕರ್ಯ ಕಲ್ಪಿಸುವ ಉದ್ದಿಮೆಗಳಾಗಿರುತ್ತವೆ. ಈ ಉದ್ದಿಮೆಗಳ ಪುನಶ್ಚೇತನಕ್ಕೆ ಸಂಬಂಧಪಟ್ಟ ಆಡಳಿತ ಇಲಾಖೆಗಳು ಹಲವು ಕ್ರಮಗಳನ್ನು ತೆಗೆದುಕೊಳ್ಳುತ್ತಿವೆ. ಸಾರ್ವಜನಿಕ ಉದ್ದಿಮೆಗಳ ಇಲಾಖೆಯು ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರದ ಮುಖಾಂತರ, ನಷ್ಟದಲ್ಲಿರುವ ಉದ್ದಿಮೆಗಳ ಮೌಲ್ಯಮಾಪನ ನಡೆಸುತ್ತದೆ. ಸದರಿ ಪ್ರಾಧಿಕಾರವು ಸೂಚಿಸುವ ಕ್ರಮಗಳನ್ನು ಕಾರ್ಯಗತಗೊಳಿಸಿ, ಉದ್ದಿಮೆಗಳ ಪುನಶ್ಚೇತನಕ್ಕೆ ಸಂಬಂಧಪಟ್ಟ ಆಡಳಿತ ಇಲಾಖೆಗಳು ಕ್ರಮವಹಿಸುತ್ತಿವೆ. |

(ಜಗದೀಶ್ ಶೆಟ್ಟರ್)

ಸಾರ್ವಜನಿಕ ಉದ್ದಿಮೆಗಳ ಸಚಿವರು